**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1038

ಸದಸ್ಯರ ಹೆಸರು : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 22.12.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ಜಿಲ್ಲೆ, ನಾಗಮಂಗಲ ತಾಲೂಕು, ಹೊಣಕೆರೆ ಹೋಬಳಿಯ ಇಜ್ಜಲಘಟ್ಟ ಗ್ರಾಮ ಗೂಡಾನ್ನಾಗಲ್ ದೇವಸ್ಥಾನಕ್ಕೆ ಸಂಬಂಧಪಟ್ಟ ಜಮೀನು ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಹೊಣಕೆರೆ ಹೋಬಳಿಯ ಇಜ್ಜಲಘಟ್ಟ ಗ್ರಾಮ ಗೂಡಾನಾಗಲ್ ಸರ್ವೆ ನಂ.105 ರಲ್ಲಿ ಆಕಾರ್‌ಬಂದ್ ನಂತೆ 577-21 ಎಕರೆ/ಗುಂಟೆ ಹಾಗೂ ಆರ್.ಟಿ.ಸಿ.ಯಂತೆ 535-01 ಎಕರೆ/ಗುಂಟೆ ಜಮೀನು ಇರುತ್ತದೆ. ವಿಶೇಷ ಜಿಲ್ಲಾಧಿಕಾರಿ, ಮಂಡ್ಯ ಇವರ ಆದೇಶ ಸಂಖ್ಯೆ: ಎಲ್‌ಎನ್‌ಡಿ(2)ಸಿಆರ್: 134/1977-78 ದಿನಾಂಕ 04-03-1982 ರಂತೆ ಅರಣ್ಯ ಇಲಾಖೆಯ ಹೆಸರಿಗೆ ಆರ್.ಟಿ.ಸಿ. ದಾಖಲಾಗಿರುತ್ತದೆ. |
| (ಆ) | ಗೂಡಾನ್ನಾಗಲ್ ದೇವಸ್ಥಾನದ ಹತ್ತಿರ ಒಟ್ಟು ಎಷ್ಟು ಎಕರೆ ಗೋಮಾಳ ಜಮೀನು ಇದೆ; ಗೋಮಾಳ ಜಮೀನನ್ನು ಒತ್ತುವರಿ ಮಾಡಿಕೊಂಡಿರುವ ರೈತರ ಹೆಸರು ವಿಳಾಸ ಹಾಗೂ ಒತ್ತುವರಿ ಮಾಡಿಕೊಂಡಿರುವ ಜಮೀನು ಎಷ್ಟು ; (ಸಂಪೂರ್ಣ ಮಾಹಿತಿ ನೀಡುವುದು) | ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಹೊಣಕೆರೆ ಹೋಬಳಿಯ ಇಜ್ಜಲಘಟ್ಟ ಗ್ರಾಮ ಗೂಡಾನಾಗಲ್ ಸರ್ವೆ ನಂ.105 ರಲ್ಲಿ ಹಾಲಿ ಆರ್.ಟಿ.ಸಿ.ಯಂತೆ 19-27 ಎಕರೆ/ಗುಂಟೆ ಸರ್ಕಾರಿ ಗೋಮಾಳ ನೆಡುತೋಪು ಎಂದು ದಾಖಲಿದ್ದು, ಮೂಲ ಆಕಾರ್‌ಬಂದ್ ವಿಸ್ತೀರ್ಣ 577-21 ಎಕರೆ/ಗುಂಟೆ ಇರುವುದರಿಂದ ಈ ವಿಸ್ತೀರ್ಣದ ಪೈಕಿ 19-27 ಎಕರೆ/ಗುಂಟೆ ಜಮೀನನ್ನು ಗುರುತಿಸಲು ಸಾಧ್ಯವಾಗಿರುವುದಿಲ್ಲ. ಗೂಡಾನ್ನಾಗಲ್ ದೇವಸ್ಥಾನ ಸುತ್ತಮುತ್ತ ಅರಣ್ಯ ಇಲಾಖೆಯವರು ನೆಡುತೋಪು ಬೆಳೆಸಿರುತ್ತಾರೆ. ಸದರಿ ಸರ್ವೆ ನಂಬರ್‌ನಲ್ಲಿ ಒತ್ತುವರಿ ಮಾಡಿರುವ ಒತ್ತುವರುದಾರರು ನಮೂನೆ-53 ನಮೂನೆ-57 ರಲ್ಲಿ ಅರ್ಜಿ ಸಲ್ಲಿಸಿದ್ದು, ಜಿಲ್ಲಾಧಿಕಾರಿ, ಮಂಡ್ಯ ಇವರ ಪತ್ರ ಸಂಖ್ಯೆ: ಎಲ್.ಎಲ್.ಡಿ(2)ಸಿಆರ್: 158/2020-21 ದಿನಾಂಕ 28-12-2020 ರಂತೆ ಸದರಿ ಅರ್ಜಿಗಳಲ್ಲಿ ವಜಾ ಮಾಡಲಾಗಿರುತ್ತದೆ. |
| (ಇ) | ಗೂಡಾನ್ನಾಗಲ್ ಸುತ್ತಮುತ್ತ ಒತ್ತುವರಿ ಮಾಡಿಕೊಂಡಿರುವ ರೈತರೆಷ್ಟು ಒಬ್ಬೊಬ್ಬ ರೈತರು ಎಷ್ಟು ಎಷ್ಟು ಜಾಗ ಒತ್ತುವರಿ ಮಾಡಿಕೊಂಡಿದ್ದಾರೆ; ರೈತರ ಹೆಸರು ವಿಳಾಸ ಹಾಗೂ ಒತ್ತುವರಿ ಜಮೀನನ್ನು ಯಾವಾಗ ಖಾಲಿ ಮಾಡಿಸಲಾಗುವುದು ಎಂಬ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು? | ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಹೊಣಕೆರೆ ಹೋಬಳಿಯ ಇಜ್ಜಲಘಟ್ಟ ಗ್ರಾಮದ ಸ.ನಂ. 105 ಮತ್ತು 30 ರಲ್ಲಿನ ಒತ್ತುವರಿದಾರರು ನಮೂನೆ-53 ಮತ್ತು 57 ರಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಒತ್ತುವರಿದಾರರ ವಿವರಗಳನ್ನು ಅನುಬಂಧ ದಲ್ಲಿ ನೀಡಲಾಗಿದೆ ಸದರಿ ಅರ್ಜಿಗಳನ್ನು ಜಿಲ್ಲಾಧಿಕಾರಿ, ಮಂಡ್ಯ ಇವರ ಪತ್ರ ಸಂಖ್ಯೆ: ಎಲ್.ಎಲ್.ಡಿ (2)ಸಿಆರ್: 158/2020-21 ದಿನಾಂಕ 28-12-2020 ರಂತೆ ವಜಾ ಮಾಡಲಾಗಿರುತ್ತದೆ. ಅರಣ್ಯ ಇಲಾಖೆಯವರು ಒತ್ತುವರಿ ತೆರವುಗೊಳಿಸಲು ನಿಯಮಾನುಸಾರ ಕ್ರಮವಹಿಸುತ್ತಿರುತ್ತಾರೆ. |

(ಕಡತ ಸಂಖ್ಯೆ:ಕಂಇ 63 ಎಲ್‌ಜಿವೈ 2021)

(ಆರ್.ಅಶೋಕ)

ಕಂದಾಯ ಸಚಿವರು